ಸಮಾಜ ಶಿಕ್ಷಣ ಪ್ರಸಾರಕ ಗ್ರಂಥಮಾಲೆ, ೭ ನೆಯ ಪುಷ್ಪ

# ಅಂದಚಂದ




೧ ನೆಯ ಆವೃತ್ತಿ




ಲೇಖಕರು :—

ಶ್ರೀ. ಸಿಂಪಿ ಲಿಂಗಣ್ಣನವರು, ಚಡಚಣ.

೧೯೫೩ ) ............ ( ಬೆಲೆ : ೦-೪-೦

# ಕರ್ನಾಟಕ ಪ್ರಾದೇಶಿಕ ಸಮಾಜ ಶಿಕ್ಷಣ ಸಮಿತಿಯವರ ಪ್ರಕಟನೆಗಳು.

೧) ಆತ್ಮೋದ್ಧಾರ
೨) ಗ್ರಾಮೋದ್ಧಾರ ಪದಗಳು
೩) ಲಾವಣಿ ಪದಗಳ ಸಂಗ್ರಹ
೪) ಪೌರನೀತಿಯ ' ಆ ಆ '
೫) ಹಿರಿಮೆಯ ಮಂತ್ರ ಅರ್ಥಾತ್ ಸ್ವಚ್ಛತೆ
೬) ಶಿಶುಸಂಗೋಪನ ಹಾಗೂ ಪ್ರಥಮ ಚಿಕಿತ್ಸೆ
೭) ಅಂದಚಂದ

ಸಮಾಜ ಶಿಕ್ಷಣ ಪ್ರಸಾರಕ ಗ್ರಂಥಮಾಲೆ, ೬ ನೆಯ ಪುಷ್ಪ

# ಅಂದಚಂದ





೧ ನೆಯ ಆವೃತ್ತಿ

ಲೇಖಕರು :—

ಶ್ರೀ. ಸಿಂಪಿ ಲಿಂಗಣ್ಣನವರು, ಚಡಚಣ.

೧೯೫೩ ) ............ ( ಬೆಲೆ : ೦-೪-೦

# ಮುನ್ನುಡಿ

ಈಗಾಗಲೆ ಶ್ರೀ. ಸಿಂಪಿ ಲಿಂಗಣ್ಣನವರು ತಮ್ಮ ಚಿರಕಾಲ ಅನುಭವದ ಫಲಗಳನ್ನು ನಮ್ಮ ಸಮಾಜ ಶಿಕ್ಷಣ ಸಮಿತಿಯ ಪ್ರಚಾರ ಹಾಗೂ ಜ್ಞಾನ ಪ್ರಸಾರ ಕಾರ್ಯಕ್ಕಾಗಿ ಅರ್ಪಿಸಿದ್ದು ಸಮಾಜ ಶಿಕ್ಷಣ ಪ್ರಪಂಚದ ಜನತೆಗೆ ಗೊತ್ತಾಗಿದೆ. ಈಗ ಅವರು "**ಅಂದಚೆಂದ**" ಎಂಬ ಚಿಕ್ಕ ಹೊತ್ತಿಗೆಯಲ್ಲಿ ಅಚ್ಚುಕಟ್ಟುತನದ ಮಹತ್ವವನ್ನು ಒಳ್ಳೆ ಚೆಂದವಾದ ರೀತಿಯಲ್ಲಿ ತಿಳಿಸಿ ಹೇಳಿರುವರು. ಜನತೆಯ ನಿತ್ಯ ಜೀವನವು ಅಚ್ಚುಕಟ್ಟುತನದ್ದಾದರೆ ಮಾತ್ರ ಸುಖಮಯವಾಗುವದೆಂಬುದನ್ನು ಮರೆಯಕೂಡದು. ಪಾಶ್ಚಿಮಾತ್ಯರು ಅಂದಚೆಂದದ ಕಡೆಗೆ ವಿಶೇಷ ಲಕ್ಷ್ಯಕೊಡುವರು. ನಮ್ಮ ನಾಡಿನ ಜನರು ಈ ವಿಷಯದಲ್ಲಿ ಅವರನ್ನು ಮಾದರಿಯನ್ನಾಗಿಟ್ಟುಕೊಳ್ಳುವದು ಹಿತಾವಹ. ಅಚ್ಚುಕಟ್ಟುತನಕ್ಕೆ ಬಡತನವು ಅಡ್ಡಬರುವದಿಲ್ಲ. ಇದ್ದುದನ್ನು ಸುವ್ಯವಸ್ಥಿತವಾಗಿಟ್ಟುಕೊಂಡು ಇದ್ದುದರಲ್ಲಿಯೇ ಸುಖವನ್ನು ಕಂಡುಕೊಳ್ಳುವದೇ ಸುಶಿಕ್ಷಿತರ ಲಕ್ಷಣ. ಈ ದೃಷ್ಟಿಯಿಂದ ಈ ಚಿಕ್ಕ ಹೊತ್ತಿಗೆಯು ಬಹಳೇ ಉಪಯುಕ್ತವಿರುವದು. ಈ ಚಿಕ್ಕ ಹೊತ್ತಿಗೆಯನ್ನು ಬರೆದುಕೊಟ್ಟಿದ್ದಕ್ಕಾಗಿ ನಮ್ಮ ಸಮಿತಿಯು ಶ್ರೀ. ಸಿಂಪಿ ಲಿಂಗಣ್ಣನವರಿಗೆ ಚಿರಋಣಿಯಾಗಿದೆ.

**BELGAUM.**
1—1—53

**R. K. Menshi,**
*Secretary & S. E. Officer,*
*for Karnatak, Belgaum.*

# ಅಂದಚೆಂದ



**ಅಚ್ಚುಕಟ್ಟುತನವೆಂದರೇನು ?**

ನಾವು ದಿನಾಲು ಉಪಯೋಗಿಸುವ ಪದಾರ್ಥಗಳು ಹಲವು ಇರುತ್ತವೆ. ಅರಿವೆ-ಅಂಚಡಿ, ಹಾಸಿಗೆ-ಹೊದಿಕೆ, ತಂಬಿಗೆ, ತಾಟು, ಪುಸ್ತಕ, ಉದ್ಯೋಗದ ಉಪಕರಣ ಮುಂತಾದವುಗಳು. ಆ ಒಡವೆಗಳು ಉಚ್ಚ ತರದವು ಇರಲಿಕ್ಕಿಲ್ಲ. ಸಾಮಾನ್ಯವಾದ ಅಗ್ಗದ ಒಡವೆಗಳಾದರೂ ಇರಲೇ ಬೇಕಲ್ಲವೇ ? ಆ ಒಡವೆಗಳನ್ನು ಸ್ವಚ್ಛವಾಗಿರಿಸಿಕೊಳ್ಳುವದಲ್ಲದೆ, ಅವುಗಳನ್ನು ಸರಿಯಾದ ಸ್ಥಳದಲ್ಲಿ ಸರಿಯಾದ ರೀತಿಯಲ್ಲಿ ಇಟ್ಟು - ತಕ್ಕೊಳ್ಳುವುದಕ್ಕೆ ಅಚ್ಚುಕಟ್ಟುತನವೆನ್ನುತ್ತಾರೆ. ಅಗ್ಗದ ಒಡವೆಗಳೆಂದು ಅಲ್ಲಿ ಇಲ್ಲಿ ಒಗೆದು, ಝುಳ ಝುಳ ಇಟ್ಟುಕೊಳ್ಳದೆ, ಆರು ತಿಂಗಳು ಕೆಲಸಕ್ಕೆ ಬರುವ ವಸ್ತುವು ಒಂದೇ ತಿಂಗಳಲ್ಲಿ ಹರಿದು, ಮುರಿದು, ಮಾಸಿ ಕೆಲಸಕ್ಕೆ ಬಾರದಂತೆ ಮಾಡಿಕೊಂಡರೆ ಅದು ಅಚ್ಚುಕಟ್ಟುತನ ಎನಿಸಲಾರದು. ಉಪಯೋಗವುಳ್ಳ ವಸ್ತುವೇ ಇರಲಿ, ಉಪಯೋಗಕ್ಕೆ ಬರಲಾರದ ವಸ್ತುವೇ ಇರಲಿ. ಅದು ಗಟ್ಟಿ ಮುಟ್ಟಾಗಿರುವಂತೆ ನೋಡಿಕೊಳ್ಳಬೇಕು; ಕೆಟ್ಟರೆ ಸರಿಪಡಿಸಬೇಕು; ಅದನ್ನು ಸ್ವಚ್ಛವಾಗಿರಿಸಿಕೊಳ್ಳಬೇಕು; ಅಂದವಾಗಿ ಇಟ್ಟುತಕ್ಕೊಳ್ಳುತ್ತಿರಲಿ; ಅದು ಹರಿದು ಮುರಿದು ಹೋದರೆ ಅದನ್ನು ಚಲ್ಲಾಪಿಲ್ಲಿಯಾಗಿ ಚಲ್ಲಾಡಿ ತೂರದೆ, ಅದನ್ನು ಇನ್ನೊಂದು ಕೆಲಸಕ್ಕೆ ಉಪಯೋಗವಾಗುವಂತೆ ಹೊಂದಿಸಿಕೊಳ್ಳುವ ಜಾಣತನವಿರುವಲ್ಲಿ ಅಚ್ಚುಕಟ್ಟುತನವು ತಾನಾಗಿಯೇ ಬರುತ್ತದೆ. ಅದು ನೆನಪಿನಲ್ಲಿಟ್ಟುಕೊಂಡು ಇಡಿಯ ದಿನವೂ ನಡೆದುಕೊಳ್ಳುವ ಸದ್ಗುಣವಾಗಿದೆ.

ಅಂಕಿ ಮಗ್ಗಿಯಂತೆ ಬಾಯಿಪಾಟ ಮಾಡಿಟ್ಟುಕೊಳ್ಳುವ ವಿಷಯವಲ್ಲ, ಬರವಣಿಗೆ ಸುಂದರವಾಗಲೆಂದು ತೀಡಿ ತೀಡಿ ಬರೆಯುವ ಅಕ್ಷರವಲ್ಲ, ನಮ್ಮನ್ನು ನಾವು ಅಂದವಾಗಿಟ್ಟುಕೊಳ್ಳುವುದೇ ಆದರ ಗುಟ್ಟು.

**ಅಂದಚಂದಗಳೇಕೆ ?**

ನಮ್ಮನ್ನು ನಾವು ಅಂದ ಚಂದವಾಗಿಟ್ಟುಕೊಳ್ಳುವುದು ಸರಕಾರದ ಅಂಜಿಕೆಗಾಗಿ ಅಲ್ಲ; ಪುಂಡರ ಹೆದರಿಕೆಗಾಗಿ ಅಲ್ಲ, ಬೀಗರ ಬಿಡಯಕ್ಕಾಗಿಯೂ ಅಲ್ಲ. ಎಂಥವನನ್ನೆ ನೋಡಿದರೂ, ಅವನಲ್ಲಿ ಅಂದ ಚಂದದ ಕಲ್ಪನೆ ಒಂದು ಇದ್ದೇ ಇರುತ್ತದೆ. ಅವನಿಗಿರುವ ತಿಳುವಳಿಕೆಯ ಮಟ್ಟಿಗೆ ಅವನು ತನ್ನನ್ನೂ ತನ್ನ ಒಡವೆಗಳನ್ನೂ ಅಂದ ಚಂದವಾಗಿ ಇರಿಸಿಕೊಳ್ಳಲು ಎತ್ತುಗಡೆ ನಡೆಸುತ್ತಾನೆ. ಈ ಗುಣವು ಎಲ್ಲಿಯಾದರೂ ನೋಡಿ ಕಲಿತದ್ದೇ ? ಇಲ್ಲವೆ ತನ್ನಿಂದ ತಾನೇ ಹುಟ್ಟಿದ್ದೇ ? ಈ ಮಾತುಗಳೆರಡೂ ಸರಿಯಾದವುಗಳೇ ? ಈ ಗುಣವು ತನ್ನಿಂದ ತಾನೆ ಹುಟ್ಟುವುದಕ್ಕೆ ಎಲ್ಲಿಯಾದರೂ ನೋಡಿದ್ದೇ ಕಾರಣವಾಗಿರುತ್ತದೆ. ಎಲ್ಲಿಯಾದರೂ ನೋಡಿ ಕಲಿತುಕೊಳ್ಳಲಿಕ್ಕೆ ತನ್ನಿಂದ ತಾನೆ ಹುಟ್ಟಿದ ಬುದ್ಧಿಯೇ ಕಾರಣವಾಗಿರುತ್ತದೆ ಸುತ್ತಲಿನ ಸೃಷ್ಟಿಯನ್ನೇ ನೋಡಿರಿ. ಗಿಡಗಳ ಎಲೆಗಳೆಲ್ಲ ಹಸಿರು. ಆ ಎಲೆಗಳಲ್ಲಿ ಒಡೆದು ಕಾಣಿಸುವ ಬಣ್ಣದ ಹೂ. ಕೋಟಿ ಎಲೆಗಳಿಗೆ ಒಂದು ಹೂವಿದ್ದರೂ ಅದು ಮರೆಯಲ್ಲಿ ಉಳಿಯಕೊಳ್ಳಬಾರದೆಂದು ಅದಕ್ಕೆ ಬೇರೊಂದು ಬಣ್ಣವನ್ನೂ, ಸುವಾಸನೆಯನ್ನೂ ದೇವರು ಕೊಟ್ಟಿರುತ್ತಾನೆ. ದನಗಳನ್ನೇ ನೋಡಿರಿ; ಹಕ್ಕಿಗಳನ್ನೇ ನೋಡಿರಿ; ಹುಳ-ಹುಪ್ಪಡಿಗಳನ್ನು ನೋಡಿದರೂ ಅವು ಅಂದ ಚಂದವಾಗಿ ಕಾಣುವಂತೆ ಅವುಗಳ ನಿರ್ಮಾಣವಿರುತ್ತದೆ. ಎತ್ತಿಗೆ ಎರಡು ಕೋಡಗಳನ್ನು ಕೊಟ್ಟ ದೇವರು ಒಂದು ಗಂಟಲಿನ ಹತ್ತಿರ ಇನ್ನೊಂದು ಬಾಲದ ಹತ್ತಿರ ಏಕೆ ಇರಿಸಿಲ್ಲ ? ಎರಡು ಕಣ್ಣುಗಳಲ್ಲಿ ಒಂದನ್ನು ಬೆನ್ನ ಮೇಲೆಯೂ ಇನ್ನೊಂದನ್ನು ಹೆಗಲ

ಮೇಲೆಯೂ ಹಾಕಿ ಬಿಟ್ಟಿದ್ದರೆ ನಡೆಯುತ್ತಿದ್ದಿಲ್ಲವೇ ? ಮೇವು ತಿನ್ನುವ ಬಾಯಿಯು ಒಂದು ನಿಟ್ಟಿಗಿರಿಸಿದ ದೇವರು, ಸೆಗಣಿ ಹಾಕುವ ದ್ವಾರವನ್ನು ಇನ್ನೊಂದು ನಿಟ್ಟಿನಲ್ಲಿ ಇರಿಸಿದ್ದಾನೆ. ಹಾಗೆ ಇರಿಸಿದ್ದು ಸುವ್ಯವಸ್ಥೆಯಲ್ಲದೆ ಅಂದ ಚಂದವೂ ಆಗಿದೆ. ಸೃಷ್ಟಿಯೆಲ್ಲ ತಾನೇ ಹುಟ್ಟಿ, ತಾನೇ ಬೆಳೆದು ತಾನೇ ಹಾಳಾಗಿ ಹೋಗುತ್ತಿರುವಂತೆ ತೋರಿದರೂ, ಅವೆಲ್ಲ ಕಾರ್ಯಗಳು ಕ್ರಮವಾಗಿ ಅಂದಚಂದಗಳನ್ನೇ ತೋರಿಸುತ್ತ, ಕಣ್ಮರೆಯಾಗಿ ಹೋಗುವವು. ಹುಟ್ಟಿದರೆ ಚಂದ, ಬೆಳೆದರೆ ಚಂದ, ಹಾಳಾದರೂ ಚಂದವೇ ಹೀಗೆ ಸೃಷ್ಟಿಯ ಅಚ್ಚಗಾವಲಾಗಿ ನಿಂತು ಎಲ್ಲವೂ ಅಂದಚಂದವಾಗಿ ಸಾಗುವಂತೆ ವ್ಯವಸ್ಥೆ ಇರಿಸಿದೆ. ಆ ಸೂಚನೆಯನ್ನು ಅರಿತುಕೊಂಡು ನಾವು ನಮ್ಮ ವ್ಯವಹಾರವನ್ನೆಲ್ಲ ಅಂದಚಂದದ ಪದ್ಧತಿಯಲ್ಲಿಯೇ ಸಾಗಿಸಬೇಕಾಗುತ್ತದೆ.

## ಸೃಷ್ಟಿಯ ಉದ್ದೇಶದ ಹೊಂದಿಕೆ.

ಬಾಳಿನ ಎಲ್ಲ ಕೆಲಸಗಳಲ್ಲಿ ಅಂದಚಂದಗಳು ಮೂಡಿ ಬರುವಂತೆ, ನಮ್ಮ ಸ್ವಭಾವವು ಹೊಂದಿಕೊಂಡರೆ ಸೃಷ್ಟಿಯ ಮಹಾಯಂತ್ರಕ್ಕೆ ಜೋಡಿಸಿದ ಸಣ್ಣ ಯಂತ್ರದಂತೆ ನಾವಾಗುತ್ತೇವೆ. ಹಾಗೆ ಆಗುವದರಿಂದ ಜೀವನವು ಹಗುರಾಗುವದು; ತೀವ್ರವಾಗಿ ಏಳಿಗೆಯ ದಾರಿಯಲ್ಲಿ ಸಾಗುವೆವು. ರಾತ್ರಿ ಕತ್ತಲು ಕವಿಯುತ್ತದೆ. ಅದನ್ನು ಕಂಡು ಮನುಷ್ಯನು ಮೊದಲು ಕಂಗೆಡುವನು. ಮನೆಯಿಂದ ಹೊರಬೀಳುವುದಕ್ಕೆ ಹೆದರುವನು. ಗಟ್ಟಿ ಜೀವ ಮಾಡಿ ಹೊರಗೆ ಬಂದರೆ ಸರಿಕರಾರೂ ಕಾಣುವದಿಲ್ಲ. ಆದ್ದರಿಂದ ಈಗ ಮಲಗಿಕೊಳ್ಳುವುದೇ ತನ್ನ ಕೆಲಸವೆಂದು ಆವನು ತಿಳಕೊಳ್ಳುವನು. ಹಾಗೆ ತಿಳಕೊಂಡರೂ ಮಲಗಿಕೊಳ್ಳದಿದ್ದರೆ ಗೂಗೆಯು ಘೂತ್ಕರಿಸಿ ಅಂಜಿಸುವದು. ಅವೆಷ್ಟೋ ಇರುಳು ಹಕ್ಕಿಗಳು ಕೂಗಿ ಎಚ್ಚರಿದ್ದವನನ್ನು

ಗಾಬರಿಗೊಳಿಸುವವು. ರಾತ್ರಿಯು ನಿದ್ರೆಯ ಕಾಲವೆಂದು ತಿಳಕೊಂಡ ವನು ಹಗಲು ಉದ್ಯೋಗದ ಕಾಲವೆಂದು ತಿಳಕೊಳ್ಳಲಿಕ್ಕೆ ತಡವಾಗುವ ದಿಲ್ಲ. ಆದರೆ ನಿದ್ರೆಯಿಂದ ಏಳುವದು ಯಾವಾಗ ? ಹಕ್ಕಿಗಳು ಚಿಲಿ ಪಿಲಿ ಗುಟ್ಟುವವು. ಕೋಳಿ ಕೂಗುವದು. ಮೂಡಲು ಹರಿಯುವದು. ಕೂಸುಗಳು ಎಚ್ಚತ್ತು ಕೈಕಾಲು ಬಿಚ್ಚಿ ಆಡತೊಡಗುವವು. ಮೊಗ್ಗೆ ಗಳೆಲ್ಲ ಕಣ್ಣು ತೆರೆದಿರುವವು. ಮುದುಕರು ಕೆಮ್ಮುತ್ತ ಕೇಕರಿಸುತ್ತ ಕುಳಿತಿರುವರು. ಇವೆಲ್ಲ ಲಕ್ಷಣಗಳು ಹಾಸಿಗೆ ಬಿಟ್ಟು ಏಳಲಿಕ್ಕೆ ತಿಳಿಸು ವವು. ಆಗಲೂ ಮಲಗಿಕೊಂಡರೆ ಸೃಷ್ಟಿಯ ಹೊಂದಿಕೆ ತುಸು ತಪ್ಪಿ ದಂತೆಯೇ ಸೈ. ಎಚ್ಚರಿದ್ದು ಕೆಲಸ ಮಾಡಬೇಕಾದ ವೇಳೆಯನ್ನು ನಿದ್ರೆಯಲ್ಲಿ ಕಳಕೊಂಡವನು ತನ್ನ ಆಯುಷ್ಯ ಕಳಕೊಂಡಂತೆಯೇ ಸರಿ. ಕಳೆದು ಹೋದ ಆಯುಷ್ಯವೆಂದರೆ ಕಡಿಮೆಯಾದ ಆಯು ಷ್ಯವೇ ಅಲ್ಲವೇ ? ಆಯುಷ್ಯ ಕಡಿಮೆಯಾಯಿತು, ಅದರಿಂದ ದುಡಿಮೆ ಕಡಿಮೆ ಆಯಿತು; ಕಡಿಮೆಯಾದ ದುಡಿಮೆಯಾದ ದುಡಿಮೆಗೆ ಪ್ರತಿ ಫಲವೂ ಕಡಿಮೆ; ಪ್ರತಿ ಫಲವೂ ಕಡಿಮೆಯಾದ ಮೇಲೆ ಯಶಸ್ಸೂ ಕಡಿಮೆಯೇ. ಹೀಗೆ ಸೃಷ್ಟಿಯ ಹೊಂದಿಕೆ ತುಸು ತಪ್ಪಿತೆಂದರೂ ಅದ ರಿಂದ ಆಯುಷ್ಯ, ಪ್ರತಿಫಲ, ಯಶಸ್ಸು ಕಡಿಮೆಯಾದವು. ಅವು ಗಳನ್ನು ತುಂಬಿ ತರಲಿಕ್ಕೆ ಇನ್ನೊಂದು ಜನ್ಮವೇ ಬೇಕು. ಒಂದೇ ಜನ್ಮ ದಲ್ಲಿ ಸಾಧಿಸಿ ಕೊಡಬೇಕೆಂದು ಸೃಷ್ಟಿಯು ನಿಶ್ಚಯಿಸಿಕೊಂಡಿದ್ದರೂ, ಮನುಷ್ಯನು ತನ್ನ ಎಚ್ಚರಗೇಡಿತನದಿಂದ ಎರಡು ಜನ್ಮಗಳು ಬೇಕೆಂದು ಕೇಳಲಿಕ್ಕೆ ನಿಲ್ಲುವನು. ಒಂದು ದಿವಸದ ಕೂಲಿಗೆ ಎರಡು ದಿನ ದುಡಿ ಯುವ ಪೆದ್ದನಂತೆ. ಆದ್ದರಿಂದ ಸೃಷ್ಟಿಯ ಉದ್ದೇಶವನ್ನು ಹೊಂದಿ ಕೊಳ್ಳುವದು ತೀರ ಅವಶ್ಯವಾಗಿದೆ. ಹೊರಗೆ ಸುಡುಸುಡುವ ಬಿಸಿಲು ಸುರಿದಿರುವಾಗ ನೆರಳಲ್ಲಿ ವಿಶ್ರಾಂತಿ ಪಡೆಯೆನ್ನುವದೇ ಸೃಷ್ಟಿಯ ಸೂಚನೆ ಆಗಿರಲಾರದೇ ? ಸೃಷ್ಟಿಯೊಂದಿಗೆ ಹೊಂದಿ ಕೊಳ್ಳುವ ದೃಷ್ಟಿ ಬಂದವನ ಕೆಲಸ ಕಾರ್ಯಗಳೆಲ್ಲ ಅಂದ ಚಂದವಾಗಿ

ಸಾಗುತ್ತವೆ. ಅವನ ಮಾತು ಕತೆಗಳೆಲ್ಲ ಸವಿ ಸವಿಯ ರಸದ ತುತ್ತುಗಳೇ ಆಗಿರುತ್ತವೆ. ಮಾತು ಬಲ್ಲವನು ಮಾಣಿಕ ತರುವನು.

**ಸೃಷ್ಟಿಯ ಕಾರ್ಯ ಓರಣವುಳ್ಳದ್ದು.**

ಮರದ ತುದಿಯು ಮೊಳಕೆ, ಚಿಗುರು, ಎಲೆಯಾಗುವ ಕ್ರಮವು ಸಾಗಿಯೆ ಸಾಗಿದೆ. ಅದಕ್ಕೆ ಒಂದು ಕ್ಷಣ ಸಹ ವಿಶ್ರಾಂತಿಯಿಲ್ಲ; ಎಷ್ಟು ದುಡಿದರೂ ಅದಕ್ಕೆ ದಣಿವಿಲ್ಲ; ಎಷ್ಟು ದಣಿದರೂ ಅದಕ್ಕೆ ಬೇಸರವಿಲ್ಲ. ಎಷ್ಟು ಬೇಸತ್ತರೂ ಅದು ಅಡ್ಡತಿಡ್ಡ ಕೆಲಸ ಮಾಡದು. ಕೈಸೋತು ಎಲೆಯ ಆಕಾರ ತಪ್ಪುವದಿಲ್ಲ. ಬಣ್ಣ ಬೇರೆಯಾಗುವದಿಲ್ಲ. ಕ್ರಮ ತಪ್ಪುವದಿಲ್ಲ. ಹುಣಿಸೆ, ಬೇವು, ಜಾಲಿ ಮೊದಲಾದ ಸಂಯುಕ್ತ ಪತ್ರಗಳುಳ್ಳ ಎಲೆಗಳನ್ನು ನೋಡಿರಿ. ಅವುಗಳಲ್ಲಿ ಕ್ರಮ, ಹೊಂದಿಕೆ, ಎಣಿಕೆ, ಬಣ್ಣ, ಬೆಡಗು ಎಲ್ಲವೂ ಸರಿಯಾಗಿಯೇ ಹೊರಬೀಳುತ್ತವೆ. ಸೆಗಣಿ, ಕೊಳಚಿ, ರೊಜ್ಜು ಒತ್ತಟ್ಟಿಗೆ ಬಿದ್ದರೆ ಅವೆಲ್ಲ ತನ್ನಿಂದ ತಾನೇ ಶುದ್ಧವಾಗುವಂತೆಯೇ ಏರ್ಪಾಡು ನಡೆದಿರುತ್ತದೆ. ಹೇಗೆಂದರೆ—ಗಾಳಿ ದುರ್ಗಂಧವನ್ನು ಹಾರಿಸಿಕೊಂಡು ಒಯ್ಯುತ್ತದೆ. ಬಿಸಿಲು ಅವರ ಅಸಹ್ಯ ಬಣ್ಣವನ್ನು ಸುಟ್ಟು ಹಾಕುತ್ತದೆ. ಉಳಿವ ಜಂಟನ್ನು ನೆಲವು ತನ್ನೊಳಗೆ ಎಳೆದುಕೊಂಡು ಅದನ್ನು ಒಳ್ಳೆಯ ಮಣ್ಣು ಮಾಡುವ ಸಿದ್ಧತೆಯನ್ನೇ ನಡೆಸಿರುತ್ತದೆ. ಒಂದು ಮಾವಿನ ಬೀಜವನ್ನೇ ತಕ್ಕೊಳ್ಳಿರಿ. ಅದರ ಮೊಳಕೆಯ ಜೋಪಾನವು ಅನೆಷ್ಟು ಜಾಗ್ರತೆಯಿಂದ ಮಾಡಲಾಗುತ್ತಿದೆ! ಆ ಮೊಳಕೆ ಅಚ್ಚಳಿಯದಂತೆ ಕಾಪಾಡಿಕೊಳ್ಳುವ ಅನುಕೂಲತೆಯನ್ನು ಕಂಡು ನಮಗೆ ಆಶ್ಚರ್ಯವಾಗದೆ ಇರುವದಿಲ್ಲ. ಮೊಳಕೆ ಚಿಗಿಯತೊಡಗಿದ ಕ್ಷಣವು ಒದಗಿದ ಕೂಡಲೇ ಬಿಚ್ಚಿಯುಂಡು ಬದುಕಲೆಂದು, ಮೊಳಕೆಯ ಹೆಗಲಿಗೆ ಎರಡು ಬುತ್ತಿಯ ಗಂಟುಗಳು ಇರುತ್ತದೆ. ಮೊಳಕೆ, ಬುತ್ತಿಯ ಗಂಟು ಇವು ಸುರಕ್ಷಿತವಾಗಿ

ಉಳಿದುಕೊಳ್ಳುವುದಕ್ಕೆ ಬೀಜದ ಮೇಲೆ ಬಿರುಸಾದ ಹೊದಿಕೆ ಇರುತ್ತದೆ. ಆ ಹೊದಿಕೆಯ ಮೇಲೆ ದಟ್ಟವಾಗಿ ಹಬ್ಬಿರುವ ಜುಬ್ಬರ. ಆ ಜುಬ್ಬರದ ದಟ್ಟಣೆಯಲ್ಲಿ ಹೊದಿಕೆಯನ್ನು ಬಿಡಿಸುವ ದಾರಿಯೂ ಕಾಣಿಸುವದಿಲ್ಲ. ಅಲ್ಲದವರ ಕೈಗೆ ಆ ವಸ್ತುವು ಬಿದ್ದು ಹಾಳಾಗಬಾರದೆಂದು ಸೃಷ್ಟಿಯು ಅದನ್ನು ಭದ್ರವಾಗಿಯೂ ಚೆಲುವಾಗಿಯೂ ಇರಿಸಿ, ಮಾದರಿಯ ಕೃತಿಯನ್ನಾಗಿರಿಸಿ ನಮ್ಮ ಮುಂದೆ ಇರಿಸಿದೆ.

### ಅನುಕರಣವು ಮಾತು ಕೃತಿಗಳಲ್ಲಿ.

ಅಚ್ಚುಕಟ್ಟು ಎನ್ನಿರಿ, ಅಂದಚಂದ ಎನ್ನಿರಿ ಅದು ನಮ್ಮ ಜೀವನವಲ್ಲಿ ಹವಣಿಸಿಕೊಳ್ಳಬೇಕು. ಇಡಿಯ ಆಯುಷ್ಯವನ್ನೆಲ್ಲ ವ್ಯಾಪಿಸಬೇಕು. ನಾವು ಮಾಡಿದ್ದೆಲ್ಲವೂ ಅಚ್ಚುಕಟ್ಟಾಗಿರಬೇಕು. ಆಡಿದುದೆಲ್ಲವೂ ಅಂದಚಂದವಾಗಿರಬೇಕು. ಮೂಗಿನೊಳಗಿರಬೇಕಾದ ಮೂಗುತಿಯನ್ನು ಕಿವಿಗೆ ಹಾಕಿದರೆ, ಇಲ್ಲವೆ ಕಿವಿಯಲ್ಲಿರಬೇಕಾದ ಬೆಂಡೋಲೆಯನ್ನು ಮೂಗಿಗೆ ಹಾಕಿದರೆ ಚಂದ ಕಾಣಿಸಲಾರದು. ಚಂದ ಕಾಣದಿದ್ದರೆ ಬಿಡಲಿ ಚಂದಗೇಡಿಯಾಗಿ ತೋರಬಾರದು. ತೋರಗಲಿಯೆಂದರೆ ಅಂಥವರನ್ನು ಜನರು ಹುಚ್ಚರೆನ್ನದೆ ಇರಲಾರರು. ನಮ್ಮ ಮನೆಯೊಳಗಿನ ಅಕ್ಕ ತಾಯಂದಿರು ಹಿಂದಿನ ಕಾಲದಲ್ಲಿ ಬೀಸುವ ಕಲ್ಲಿನ ಹಾಡುಗಳನೆಷ್ಟೋ ಹಾಡಿದ್ದಾರೆ. ಅವರು ಕವಿಗಳಲ್ಲ; ಕಲಿತವರೂ ಅಲ್ಲ. ವಿದ್ವಾಂಸರ ಇಲ್ಲವೆ ಪಂಡಿತರ ಮನೆತನದವರೂ ಅಲ್ಲ. ಅವರು ಗಂಡಸರ ಕೆಲಸದಲ್ಲಿ ಸಹಕಾರಿಗಳಾಗುತ್ತ ಮನೆ-ಮಕ್ಕಳನ್ನು ನೋಡಿಕೊಳ್ಳುವ ಸಾಮಾನ್ಯ ಹೆಂಗಸರು. ಅವರ ಹಾಡಿನಲ್ಲಿ ಕಂಡು ಬರುವ ಅಚ್ಚುಕಟ್ಟುತನವನ್ನಾಗಲಿ, ಅಂದಚಂದವನ್ನಾಗಲಿ ಇಂದು ನಾವು ಅಭ್ಯಾಸ ಮಾಡುವಂತಿದೆ. ಚೊಕ್ಕವಾದ ವಿಚಾರ, ಚಿಕ್ಕವಾದ ಮಾತು, ಉಚಿತವಾದ ವಿಚಾರ, ಖಚಿತವಾದ ಸಂಗತಿ ಇವುಗಳನ್ನು ಕಂಡವರು ಆ ಹಾಡುಗಳಿಗೆ ಮರುಳಾಗದೆ ಇರಲಾರರು.

ಲೆಕ್ಕಕ್ಕೆ ಸಿಲುಕದ ಆ ಅಸಂಖ್ಯ ಹಾಡುಗಳಲ್ಲಿ ಒಂದೆರಡನ್ನು ಮಾತ್ರ ನಾನಿಲ್ಲಿ ಉದಾಹರಿಸುತ್ತೇನೆ. ಅವಷ್ಟನ್ನೇ ನಾವು ಲಕ್ಷ್ಯ ವಿಟ್ಟು ಅಭ್ಯಸಿಸಿದರೆ ಆ ಮಾತುಗಳಲ್ಲಿರುವ ಅಚ್ಚುಕಟ್ಟುತನವೂ ಅಂದ ಚಂದವೂ ಕಂಡು ಬರುತ್ತವೆ. ಆ ಬಳಿಕ ಅದೇ ದೃಷ್ಟಿಯಿಂದ ಹಲವು ಹಾಡುಗಳನ್ನು ಅಭ್ಯಾಸ ಮಾಡುವುದಕ್ಕೆ ಅನುಕೂಲವಾ ಗುತ್ತದೆ.

ಹೆಸರೀಗಿ ರಬಕವಿ ಮೊಸರೀಗಿ ನೀರಿಲ್ಲ
ಕುಸಲದ ಸಿಂಬಿ ಬರಿಗೊಡ । ಬಾಲ್ಯಾರು ।
ಉಸ್ಸೆಂದು ಭಾವಿ ಇಳಿದಾರ ॥
ಛಂದಕ್ಕ ನಿಂಬರಗಿ ಗಂಧಕ್ಕ ನೀರಿಲ್ಲ
ಟೆಂಗಿನ ಪರಟಿ ಬರಿಗೊಡ । ಬಾಲೇರ ।
ರಂಬ್ಯಾರ ಜಗಳ ವರತ್ಯಾಗ ॥

ಈ ಎರಡು ಹಾಡುಗಳಲ್ಲಿ ಒಂದು ಇನ್ನೊಂದಕ್ಕೆ ಉತ್ತರ ದಂತಿವೆ. ರಬಕವಿಯ ಹುಡುಗೆಯನ್ನು ನಿಂಬರಗಿಗೂ, ನಿಂಬರಗಿಯ ಹುಡುಗೆಯನ್ನು ರಬಕವಿಗೂ ಕೊಟ್ಟಿತೆಂದು ತೋರುತ್ತದೆ. ನಿಂಬರ ಗಿಯ ಹುಡುಗೆಯು ರಬಕವಿಯನ್ನೂ, ರಬಕವಿಯ ಹುಡುಗಿಯು ನಿಂಬರಗಿಯನ್ನೂ ಮೂದಲಿಸುತ್ತಾಳೆ. ರಬಕವಿಯು ಬೆಲೆಯುಳ್ಳ ಸೀರೆಗಳಿಗೆ ಜನ್ಮಸ್ಥಳ. ಅಲ್ಲಿಯ ಜನರ ಗಳಿಕೆ ಹೆಚ್ಚು. ಅವರು ಹಾಲು ಮೊಸರು ತಿಂದುಂಡು ಸುಖವಾಗಿರುವರು. ಒಳ್ಳೆಯ ಅರಿವೆಗಳನ್ನು ಉಟ್ಟುತೊಟ್ಟು ಸಿಂಗಾರವಾಗುವವರು, ಅದರಂತೆ ನಿಂಬರಗಿ ರಾಮದೇವರ ಜಾತ್ರೆಗೆ ಪ್ರಸಿದ್ಧವಾದ ಊರು. ದೇವರು ಜಾಗ್ರತವಾಗಿದ್ದಾನೆ. ಎಲ್ಲ ಜಾತಿಯವರೂ ಗ್ರಾಮ ದೇವತೆಗೆ ನಡಕೊಳ್ಳುವವರು. ಸಂಸಾರದ ಜಂಜಾಟಗಳೇನಿದ್ದರೂ ವಿಸ್ತಾರ ವಾದ ಪೌಳಿಗಳುಳ್ಳ ದೇವಾಲಯಕ್ಕೆ ಹಳ್ಳದಾಟಿ ಹೋಗಿ, ದರ್ಶನ ತಕ್ಕೊಂಡು ಬಂದರೆ ಮನಸ್ಸಿಗೆ ತುಂಬ ಸಮಾಧಾನವಾಗುವದು.

ಹೀಗೆ ಆವೆರಡು ಊರುಗಳು ತಂತಮ್ಮ ರೀತಿಯಲ್ಲಿ ಸೊಗಸಾದ ಸುಖಕರವಾದ ಊರುಗಳೇ ಸರಿ. ಆದರೆ ಆ ಊರುಗಳಿಗೆ ನೀರಿನ ಕೊರತೆ ಒಂದಿಷ್ಟು ಆಗಾಗ ತಲೆದೋರುತ್ತದೆ. ಆಗ ನೀರಿನ ಬವಣೆಯಲ್ಲಿ ವಿಶೇಷವಾಗಿ ಹೆಣ್ಣುಮಕ್ಕಳೇ ಸಿಕ್ಕು ಕಷ್ಟಪಡುವವರು. ಅದರಲ್ಲಿಯೂ ಸೊಸೆಯರಾಗಿ ಬಂದ ಹೆಣ್ಣುಮಕ್ಕಳಿಗಂತೂ ಆ ತೊಂದರೆಯು ಅತಿಶಯವಾಗಿ ತೊಳಲಿಸುವದು. ಆ ಅನುಭವವು ರಬಕವಿ ನಿಂಬರಗಿ ಎರಡೂ ಊರುಗಳ ಸೊಸೆಯಂದಿರಿಗೆ ತುಂಬ ಬಂದಿದೆ. ಬಂದ ತೊಂದರೆಯನ್ನು ಎಲ್ಲರೂ ಸರಿಯಾಗಿ ಹಂಚಿಕೊಂಡಿದ್ದರೆ ತುಸು ಹಗುರೂ ಆಗಬಹುದಿತ್ತು. ಆದರೆ ಸೊಸೆಯಂದಿರಿಗೆ ಉಳಿದುದರಲ್ಲಿ ಪಾಲು ಎಷ್ಟೇ ಬಂದರೂ, ನೀರಿನ ತೊಂದರೆಯಲ್ಲಿ ಮಾತ್ರ ದಟ್ಟ ಪಾಲು ಅವರಿಗೆ ಬರುತ್ತಿರುವದುಂಟು. ಆ ದಟ್ಟ ಪಾಲು ಬಂತೆಂದು ಅವರಿಗೆ ಹಿಗ್ಗು ಆಗದೆ, ಸಿಟ್ಟೇ ಬರುವುದು ಸ್ವಾಭಾವಿಕ. ಒಳಗಿಂದೊಳಗೆ ಕುದಿ ಕುದಿಯುವ ಆ ಹೆಣ್ಣು ಮಕ್ಕಳು ತಂತಮ್ಮ ಹೊಟ್ಟೆಯೊಳಗಿನ ಸಿಟ್ಟನ್ನೆಲ್ಲ ಮಾತಿನ ಕಿಡಿಗಳ ರೂಪದಿಂದ ಹೊರಗೆ ಹಾಕಿಬಿಡುತ್ತಾರೆ. ಒಳ್ಳೆಯ ಸೀರೆಗಳಿಗೆ ರಬಕವಿಯು ಹೆಸರಾಗಿದೆ, ಅಹುದು. ಆದರೆ ಬೆಳಗು ಮುಂಜಾನೆ ಮೊಸರು ಕಡೆದು ಮಜ್ಜಿಗೆ ಮಾಡುವಾಗ ಬೆರೆಸುವುದಕ್ಕೆ ತಂಬಿಗೆ ನೀರು ಸಹ ಇರುವದಿಲ್ಲ. ತರುವುದಕ್ಕೆ ವೈಲು ದೂರವಿರುವ ಸವಳು ನೀರಿನ ಭಾವಿಗೆ ಹೋಗಬೇಕು. ಇಲ್ಲವೆ ಹರದಾರಿ ದೂರವಿರುವ ಕೃಷ್ಣಾ ನದಿಗೆ ಹೊರಡಬೇಕು! ಬೆಲೆಯುಳ್ಳ ಸೀರೆಯುಟ್ಟುಕೊಳ್ಳುವ ಬಾಲೆಯರಿಗೆ ಒಳ್ಳೆಯ ಕುಸಲದ ಅರಿವೆಯೋ ಸಿಂಬಿಗೆ ಸಿಕ್ಕುತ್ತವೆ ದೊಡ್ಡದೊಂದು ತಾಮ್ರದ ಕೊಡವಾಯಿತು; ಸಿಂಗಾರದ ಸಿಂಬಿಯರಿವೆಯಾಯಿತು ಆದರೆ ಭಾವಿಯಲ್ಲಿ ನೀರೆ ಸಿಗದು. ಆಳವಾದ ಭಾವಿಯಲ್ಲಿ ಸಾಲಾಗಿ ಇಳಿದು ಹೋಗಿ ನಿರು ತುಂಬಿಕೊಂಡು ಮೇಲೇರುವ ಶ್ರಮದ ನೆನಪು ಬಂದು ಉಸ್ಸೆಂದು ಭಾವಿ

ಇಳಿಯುವುದು ಸಹಜವಾಗಿದೆ. ಅದರಂತೆ ನಿಂಬರಗಿಯಲ್ಲಿ ನೀರು ತರುವುದು ಊರು ಮುಂದಿನ ಹಳ್ಳದಿಂದ ಹಳ್ಳ ಹರಿಗಡಿದಿರುವದು. ವರ್ತಿಯೊಳಗಿನ ನೀರನ್ನು ಪರಟೆಯಿಂದ ಕೊಡದಲ್ಲಿ ಹಾಕಿಕೊಂಡು ತರಬೇಕಾಗುವದು. ಒಮ್ಮೊಮ್ಮೆ ದೇವರ ಪೂಜೆಗೆ ಗಂಧ ತೆಯ್ದೇ-ನೆಂದರೆ ತೊಟ್ಟು ನೀರಿರುವದಿಲ್ಲ. ಚಂದವಾದ ಜಾತ್ರೆಯಾಗುವ-ದೆಂದು ನಿಂಬರಗಿಯು ಹೆಸರು ಪಡೆದಿರಬಹುದು. ದೇವರಿಗೆ ಭಕ್ತರು ಒಡೆಸಿದ ತೆಂಗಿನ ಪರಟೆಗಳು ಕೈಕಾಲಿಗೆ ಬಿದ್ದಿರಬಹುದು. ವರ್ತಿಯ ನೀರು ತುಂಬುವುದಕ್ಕೆ ಬೊಗಸೆಗಿಂತ ಪರಟೆಯ ಅನುಕೂಲತೆ ಹೆಚ್ಚು. ಅದನ್ನು ಹುಡುಕುವ ಕಾರಣವೇ ಇರದು. ಹಳ್ಳದ ದಂಡೆಯ ಮೇಲೆ ನೀರಿಗೆಂದು ಬಂದ ಎಳೆವಯಸ್ಸಿನ ಬಾಲೆಯರು ಪಾಳಿಹಚ್ಚಿ ನಿಂತಾಗ ನೀರಾಟವಾಡ ಬಂದ ರಂಭೆಯರಂತೆ ತೋರಿದರೆ ಆಶ್ಚರ್ಯವೇನೂ ಇಲ್ಲ. ಆದರೆ ಆ ರಂಭೆಯರ ಆಟಿಗೆಗಳೆಂದರೆ ಒಡಕು ಪರಟೆ; ನೀರಿಲ್ಲದ ಬರಿಗೊಡ! ನೀರಿಲ್ಲದ ವರ್ತೆಯೇ ಅವರಿಗೆ ಜಲಾಶಯ. ನೀರಿನ ಪಾಳಿಗಾಗಿ ಜಗಳಾಡುವದೇ ಆ ರಂಭೆಯರ ನೀರಾಟ! — ಹೀಗೆ ಈ ಹಾಡುಗಳಲ್ಲಿರುವ ಉಚಿತವಾದ ಮಾತು, ಉಚಿತವಾದ ಸಂಗತಿ ಇವು ಗಳನ್ನು ಸಹಜವಾಗಿ ಗುರುತಿಸಬಹುದಾಗಿದೆ. ಮಾತಿನಲ್ಲಿ ಅಂದ ಚಂದವನ್ನು ಕಾಣುವಂತೆ ಕೃತಿಗಳಲ್ಲಿಯೂ ಅಂದಚಂದವನ್ನು ತೋರಿ-ಸಿಕೊಡುವ ಉದಾಹರಣೆಗಳು ಹೇರಳವಾಗಿ ಕಣ್ಣಿಗೆ ಬೀಳುತ್ತವೆ.

## ಕೈಮುಟ್ಟಿ ಮಾಡು

ಯಾವ ಕೆಲಸವನ್ನು ಮಾಡಿದರೂ ಅದು ಅಂದಚಂದವಾಗಿ-ರಬೇಕು. ಹಾಯ್ದು ಹೋದವನ ಹೆಜ್ಜೆ ಮೂಡುತ್ತವೆ. ದನ ಹಾಯ್ದಾಡಿದ್ದರೆ ಅಲ್ಲಿ ದಗ್ಗುದುಳಿದಂತೆ ಕಾಣಿಸುತ್ತದೆ; ಕೋಣಗಳು ಕಾದಾಡಿದ್ದರೆ ತೊತ್ತಳದುಳಿದಂತೆ ತೋರುತ್ತದೆ. ಅದರಂತೆ ಕತ್ತೆ ಉರುಳಾಡಿ ಹೋದ ಚಿಹ್ನವೂ ಮೂಡಿರುತ್ತದೆ; ಹಾವು ಚೇಳು-

ಹರಿದಾಡಿದ್ದರೆ ಅಲ್ಲೊಂದು ಹೆಜ್ಜೆ ಚಿತ್ರಿತವಾಗಿರುತ್ತದೆ. ಅದರಂತೆ ಮನುಷ್ಯನು ಮಾಡಿದ ಕೃತಿಗೆ ಅಲ್ಲೊಂದು ಲಕ್ಷಣ ಕಂಡು ಬರುತ್ತದೆ. ವಸ್ತುವು ಇಟ್ಟಿನದ್ದೋ ಒಗೆದದ್ದೋ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಆದ್ದರಿಂದ ಮಾಡಿದ್ದು ಸುಂದರವಾಗಿರಬೇಕು. ಅದು ಅಚ್ಚುಕಟ್ಟಾಗಿರಬೇಕು. ಹಾಗಾಗಬೇಕಾದರೆ ಕೈಮುಟ್ಟಿ ಮಾಡುತ್ತ ಹೋಗಬೇಕು. ತಾನು ಮಾಡಬೇಕಾದುದನ್ನು ಅನ್ಯರಿಂದ ಮಾಡಿಸುವ ಮೈಗಳ್ಳತನವನ್ನು ಕಳೆದುಕೊಳ್ಳಬೇಕು. "ತಾನು ಭುಂಜಿಸುವ ಊಟ, ತಾನು ಭೋಗಿಸುವ ಕೂಟ ಅನ್ಯರಿಂದ ಮಾಡಿಸಬಹುದೇ ?" ಎಂದು ಶ್ರೀಬಸವಣ್ಣನವರು ಕೇಳುತ್ತಾರೆ. ತಾನುಂಡರೇ ತನ್ನ ಹೊಟ್ಟೆ ತುಂಬುತ್ತದೆ; ತನ್ನ ತೃಪ್ತಿ ತನಗಾಗುತ್ತದೆ. ಅದೆಂಥ ಕರುಳಿನವನಿದ್ದರೂ ಅವರು ಉಂಡರೆ ತಾನು ಉಂಡಂತೆ ಎಂದಿಗೂ ಆಗಲಾರದು. ತನ್ನ ಹಸಿವೆಯು ತಾನು ಉಂಡಾಗಲೇ ಸಾರ್ಥಕವಾಗುತ್ತದೆ. ತನ್ನ ಬಾಯಳತೆಗೆ ತಕ್ಕಂತೆ ತನ್ನ ಕೈಯೇ ಸರಿಯಾದ ತುತ್ತು ನೀಡುತ್ತದೆ. ಅಂತೆಯೇ ತಾನು ಮಾಡಿದ್ದು ಉತ್ತಮವೆಂದು ಹಿರಿಯರು ಹೇಳುತ್ತ ಬಂದಿದ್ದಾರೆ. ಮಗನು ಮಾಡಿದರೆ ಮಧ್ಯಮವಾಗುವದೆಂದೂ ಆಳು ಮಾಡಿದರೆ ಹಾಳು ಆಗುವದೆಂದೂ ಮನಗಂಡಿದ್ದಾರೆ. ಮಾಡಿದ ಕೆಲಸವು ಅಂದಚಂದವಾಗಿದ್ದರೆ ಅದು ಸಾಧನವಾಗುತ್ತಿದೆ; ಅಚ್ಚುಕಟ್ಟಾಗಿದ್ದರೆ ಯೋಗವಾಗುತ್ತದೆ.

## ಕ್ರಮವರಿತು ಕೆಲಸ ಮಾಡು

ಕೈಬಂದ ಮಾಡುತ್ತ ಹೋದರೆ ತೀರದು. ಮಾಡುವುದನ್ನು ಕ್ರಮದಿಂದ ಮಾಡುವುದನ್ನೂ ಅಭ್ಯಸಿಸಬೇಕಾಗುತ್ತದೆ. ಕಡಲೆ ಬೇಳೆಯನ್ನು ನುಣ್ಣಗೆ ಕುದಿಸಿ, ಬಳಿಕ ಬೆಲ್ಲದೊಡನೆ ಬೆರೆಸಿ ಅರದರೆ ಹೂರಣವಾಗುತ್ತದೆ. ಆದರೆ ಈ ಕ್ರಮವನ್ನು ಬಿಟ್ಟು ಬೆಲ್ಲವನ್ನೂ

ಕಡಲೇಬೇಳೆಯೊಂದಿಗೆ ಮೊದಲು ಅರೆದು ಆ ಮೇಲೆ ಕುದಿಸಿದರೆ ಆದೆಂಥ ಹೂರಣವಾದೀತು. ಕುದಿಸುವುದೂ, ಬೆಲ್ಲ - ಬೆರೆಸುವದೂ, ಅರೆಯುವುದೂ, ಈ ಎಲ್ಲ ಕ್ರಿಯೆಗಳೆಲ್ಲ ಅದರಲ್ಲಿ ಒಳಗೊಂಡಿದ್ದರೂ ಕ್ರಮವೊಂದು ಇಲ್ಲದ್ದರಿಂದ ಅದು ಸರಿಯಾದ ಹೂರಣವಾಗಲಾರದು. ಕೃತಿಗೆ ಕ್ರಮವು ಜೋಡಣೆಗೊಂಡರೆ ಅಂದಚಂದವಾದ ವಸ್ತುವು ನಿರ್ಮಾಣವಾಗುತ್ತದೆ. ನಮ್ಮ ಕೃತಿಯು ಕ್ರಮಗೊಂಡು ಸಾಗಬೇಕಾದರೆ ನಮ್ಮ ವಸ್ತ್ರ ಒಡವೆಗಳಾಗಲಿ ಉಪಕರಣವಾಗಲಿ ನಿಯಮಿತ ಸ್ಥಳದಲ್ಲಿ ಇರತಕ್ಕದ್ದು. ಕೆಲವರಿಗೆ ತಾವು ಉಪಯೋಗಿಸುವ ವಸ್ತುಗಳನ್ನು ಸ್ವಚ್ಛಗೊಳಿಸುವ ಕಲೆಯು ತಿಳಿದಿರುತ್ತದೆ. ಆದರೆ ಅದರೊಡನೆ ಸ್ವಚ್ಛವಾಗಿರಿಸಿಕೊಳ್ಳುವ ಕಲೆಯೂ ಅದಕ್ಕಿಂತ ಮೊದಲು ತಿಳಿಯಬೇಕಾಗಿರುತ್ತದೆ. ಸ್ವಚ್ಛವಾಗಿರಿಸಿಕೊಳ್ಳುವ ಒಲವಿನಿಂದ ಸ್ವಚ್ಛಮಾಡಿಕೊಳ್ಳುವುದಕ್ಕೆ ಬೇಕಾಗುವ ಶ್ರಮವು ಕಡಿಮೆ ಹತ್ತುತ್ತದೆ. ಒಮ್ಮೆ ಒಬ್ಬ ಕಲೆಗಾರನ ಬಳಿಯಲ್ಲಿ ಕುಳಿತು, ಕೆಲಸವನ್ನು ಹೇಳಿಕೊಡೆಂದು ಕೇಳಿದರೆ, ಅವನು– “ ಉಪಯೋಗಕ್ಕೆ ತಕ್ಕೊಂಡ ವಸ್ತುವನ್ನು ಮೊದಲಿದ್ದ ಸ್ಥಳದಲ್ಲಿಯೇ ಅದನ್ನಿಡುವ ರೂಢಿ ಮಾಡುವದೇ ಮೊದಲನೇ ಪಾಠ ” ಎಂದು ಹೇಳಿದ್ದು, ನನಗೆಂದೂ ಮರೆವಾಗಲಾರದು. ಇನ್ನೊಬ್ಬರು ಕೀಲಿ ಹಾಕಿದ ತಮ್ಮ ಮನೆಯೊಳಗಿನ ಒಂದು ಔಷಧಿಯ ಪುಡಿಯನ್ನು ತರಿಸಿಕೊಳ್ಳುವುದಕ್ಕೆ ಒಂದು ಮಗುವಿನ ಕೈಯಲ್ಲಿ ಕೀಲಿ ಕೊಟ್ಟು,—“ ಕಡೆಯ ಕೋಣೆಯಲ್ಲಿ ಉತ್ತರನಿಟ್ಟಿನ ಕಪಾಟದ ೩ನೇ ಸಾಲಿನಲ್ಲಿ ಹಸುರು ಡಬ್ಬಿಯಲ್ಲಿ ಕರೆ ಕಾಗದಪುಡಿಕೆ ತಕ್ಕೊಂಡು ಬಾ ” ಎಂದು ಹೇಳಿದರು. ಆ ಮಗುವು ಅಷ್ಟೊಂದು ಪ್ರಭುದ್ಧವಲ್ಲದಿದ್ದರೂ, ಅದೇ ಪುಡಿಕೆಯನ್ನು ತೆಗೆದುಕೊಂಡು ಬಂದು, ನಮಗೆಲ್ಲ ಆಶ್ಚರ್ಯವನ್ನು ಉಂಟು ಮಾಡಿತು. ಕ್ರಮವರಿತು ಕೆಲಸ ಮಾಡುವವರು, ತಮ್ಮ ವಸ್ತುಗಳನ್ನು ಒಂದು ಕ್ರಮದಿಂದ ಇರಿಸಿಕೊಳ್ಳುವದರಿಂದ ಇಷ್ಟು ಸುಲಭವಾಗಿ ತುಸು–

ವೇಳೆಯಲ್ಲಿ ಕೆಲಸಮುಗಿದು ಬಿಡುತ್ತವಲ್ಲವೇ ? ಅದೇ ಔಷಧಿ ಪುಡಿಯು ಇನ್ನೊಬ್ಬರಲ್ಲಿದ್ದರೆ, ಮನೆಯೊಳಗಿನ ಇದ್ದ ಬಿದ್ದ ಪೆಟ್ಟಿಗೆಗಳನ್ನೆಲ್ಲ ಬರಿದು ಮಾಡಬೇಕಾಗುತ್ತಿತ್ತು. ಕೈಗೆಸಿಕ್ಕ ಪುಡಿಗಳನ್ನೆಲ್ಲ ಬಿಚ್ಚಿ ಬಿಚ್ಚಿ ನೋಡಿ ತೆಗೆದಿಡುತ್ತ ಹುಡುಕಬೇಕಾಗುತ್ತಿತ್ತು. ಆದರಿಂದ ಕಳೆಯುವ ವೇಳೆಗೆ ಲೆಕ್ಕವಿಲ್ಲ. ಪಡುವ ಶ್ರಮಕ್ಕೆ ಸೀಮೆಯಿಲ್ಲ. ವೇಳೆ-ಶ್ರಮಗಳ ಉಳಿತಾಯವೂ ಒಂದು ಹಿರಿಯ ಲಾಭವೇ ಎಂದು ತಿಳಕೊಂಡವರು ಮಾತ್ರ, ಅವುಗಳ ವಿಷಯದಲ್ಲಿ ಎಚ್ಚರಿಕೆಯನ್ನು ತಕ್ಕೊಳ್ಳುತ್ತಾರೆ. ವೇಳೆ ಶ್ರಮಗಳ ಉಳಿತಾಯವೇ ಆಯುಷ್ಯ ವೃದ್ಧಿಯಲ್ಲವೇ ?

### ಅಂದ ಚಂದದ ಕೃತಿಗೆ ಅದರ ಉಪಯೋಗ ರೂಢಿ

ನಮ್ಮ ಮಾತಿನಲ್ಲಿ ಅಂದಚಂದ ಬರುವುದಕ್ಕೂ, ಕೃತಿಯಲ್ಲಿ ಅಚ್ಚುಕಟ್ಟು ತಲೆದೋರುವದಕ್ಕೂ, ಅದರ ಉಪಯೋಗದ ರೂಢಿ ಬರಬೇಕಾಗಿದೆ. ಅಂದಚಂದಗಳನ್ನು ಹುಟ್ಟಾ ನೋಡಲಾರದವನು ಅವುಗಳನ್ನು ಬಯಸಲಿಕ್ಕೆ ಸಾಧ್ಯವಿಲ್ಲ. ಬಯಕೆಯಿಲ್ಲದಿದ್ದರೆ ಬಳಸಲು ದೊರೆಯಲಾರದು. “ಮೊಟ್ಟೆ ಹೊಡೆಯುವವನ ಆಳು ಆಗಬಾರದು; ರೊಟ್ಟೆ ಉಣ್ಣುವವನ ಹೆಂಡತಿಯಾಗಬಾರದು” ಇದೊಂದು ಹಳ್ಳಿಗರ ಅನುಭವದ ಮಾತಿದೆ. ತೋಟದ ಒಡೆಯನೇ ಮೊಟ್ಟೆಹೊಡೆಯಹತ್ತಿದನೆಂದರೆ, ತನ್ನ ತೋಟದ ಕೆಲಸವು ತೃಪ್ತಿಕರವಾಗಿ ಮುಗಿಯಲೆಂದು ಅವನು ಆಶಿಸುವುದು ಸಹಜವಾಗಿದೆ. ತಾನು ಮಾಡುವುದೇ ಉತ್ತಮ ಕೆಲಸವಲ್ಲವೇ? ತನ್ನ ತೋಟದ ಕೆಲಸ; ಮೇಲೆ ತಾನು ಮಾಡುವ ಕೆಲಸ ಇವೆರಡರ ಹೊಂದುವಳಿಯಾಗಿ ಬಿಟ್ಟರೆ ಅಲ್ಲಿ ಆಲಸ್ಯಕ್ಕೆ ಸ್ಥಳವಿಲ್ಲ; ಅಸವಸಿತನಕ್ಕೆ ಆಸರವಿಲ್ಲ. ಹೀಗೆ ಕೆಲಸವು ಯಂತ್ರದಂತೆ ಸಾಗತೊಡಗಿದಾಗ, ನೀರುಣ್ಣಿಸುವ ಆಳಿಗೆ ಗಡಬಡಿಯೇ ಗಡಬಡಿ. ಮೈತಪ್ಪಿಸಿಕೊಳ್ಳಲು ಸಾಧ್ಯವೇ ಇಲ್ಲ.

ಅಲಕ್ಷ್ಯ ಮಾಡಿದರೆ ತಪ್ಪು ಹೊರಬೀಳುತ್ತದೆ. ಆದ್ದರಿಂದ ಅಂಥ ಆಳಿನ ಕೆಲಸವು ಬಲು ಬಿಗಿಯಾದುದು. ಅದಕ್ಕಿಂತಲೇ ಅಂಥ ಆಳುಗಳ ತಮಗೆ ಬಂದಿರುವ ಅನುಭವವನ್ನೇ ಅಚ್ಚುಕಟ್ಟಾಗಿ ಅಚ್ಚೊತ್ತಿದಂತೆ ಹೇಳಿಕೊಳ್ಳುತ್ತಾರೆ. ಆಳಿನ ಅನುಭವದಂತೆ ಊಟ ಬಲ್ಲವನಾದ ಗಂಡನಿಗೆ ಹೆಂಡತಿಯ ಅನುಭವವೂ ಅದೇ ಪ್ರಕಾರದ್ದಿರುವದು. ಅಟ್ಟುಂಡವನ ಹೆಂಡತಿಯಾಗಬಾರದೆನ್ನುವ ಮಾತಿನಲ್ಲಿಯೂ ಇದೇ ಅರ್ಥವಿದೆ; ಅದರಂತೆ “ಕೈಲಾಗದ ಸೂಳಿ ಅಯ್ಯನ ಕೂಡ ಎದ್ದು ಹೋದಳು” ಎನ್ನುವ ಮಾತು ಸಹ ಅದೇ ಅನುಭವವನ್ನು ಬೇರೊಂದು ವಿಧದಲ್ಲಿ ಬಯಲಿಗಿಡುತ್ತದೆ. ಅಡಿಗೆ ಮಾಡಲಾರದ ಮೈಗಳ್ಳತನ ಮಾಡಬೇಕೆಂದರೂ ಬರಲಾರದ ವಿದ್ಯೆ–ಇವೆರಡೂ ಕೂಡಿದ ಕನ್ಯೆಗೆ ಕೈಲಾಗದ ಸೂಳಿಯೆಂದು ಹಿರಿಯರು ಬಯ್ದಿದ್ದಾರೆ. ಅಂಥ ಕನ್ಯೆಯರು ತಿರುಪೆಯವರ ಮನೆಯಲ್ಲಿ ದಕ್ಕುಂವಂಥವರು. ಇನ್ನು ಅಯ್ಯಗಳ ನೋಡಿರಿ. ಅವರ ಊಟ ಹೊರಗೆ ತಂಬೂರಿ ಮನೆಗೆ ಕರೆದವರ ಮನೆಯಲ್ಲಿ ಉಂಡುಬರುವ ಅಯ್ಯನಿಗೆ ಮನೆಯಲ್ಲಿ ಅಡಿಗೆ ಮಾಡಿದರೂ ಸರಿ, ಮಾಡದಿದ್ದರೂ ಸರಿ. ಹೆಂಡತಿ ಅಡಿಗೆ ತಿಳಿದವಳಿದ್ದರೂ ಅಷ್ಟೇ. ವಿವಿಧ ಊಟಗಳೆಲ್ಲ ಭಕ್ತರೆಂಬವರ ಮನೆಯಲ್ಲಿ ಸಿಕ್ಕು ಬಿಟ್ಟಿರುವದರಿಂದ ಅಯ್ಯನಿಗೆ ಮನೆಯೊಳಗಿನ ಅಡಿಗೆಯನ್ನು ನೋಡುವ ಕಾರಣವೇ ಬೀಳುವದಿಲ್ಲ. ತಿರುಗಿ ಕೇಳಿದರೆ, ಗಂಡನೊಂದಿಗೆ ಹೆಂಡತಿಗೂ ಒಮ್ಮೊಮ್ಮೆ ಊಟದ ಬಿನ್ನಹ ಬರುವ ಸಂಭವವೇ ಹೆಚ್ಚಾಗಿರುತ್ತದೆ. ಅದು ಇರದಿದ್ದರೆ ಮಠಕ್ಕೆ ಎಡೆತರುವ ಪದ್ಧತಿ ಬರುವಲ್ಲಿ ತಾನಿರುವಲ್ಲಿಯೇ ಅಡಿಗೆ ನಡೆದು ಬರುವದರಿಂದ, ಅಂಥಲ್ಲಿ ಹೆಂಡತಿಯಾದವಳು ಅಡಿಗೆ ಮಾಡಿ ದಣಿಯುವ ಕಾರಣವೂ ಇಲ್ಲ. ಅಡಿಗೆ ಮಾಡುವುದಕ್ಕೆ ತಲೆ ಖರ್ಚು ಮಾಡುವ ಕಾರಣವೂ ಇಲ್ಲ. ಈ ಅನುಕೂಲತೆಯನ್ನು ನೋಡಿಯೇ ಮೇಲೆ ಹೇಳಿದ “ಕೈಲಾಗದ ಸೂಳೆ” ಯೆನಿಸಿಕೊಂಡವಳು ಅಯ್ಯನ

ಕೂಡ ಎದ್ದು ಹೋಗಿ ಸುಖಪಡಬೇಕೆನ್ನುತ್ತಾಳೆ. ಹಾಗೆ ಆಕೆ ವಿಚಾರಿಸುವುದು ಸಹಜವೂ ಸ್ವಾಭಾವಿಕವೂ ಆಗಿರುವದು. ಒಟ್ಟಾರೆ ಒಳ್ಳೆಯ ಅಡಿಗೆಯನ್ನು ತಿಂದುಂಡ ರೂಢಿಯಿದ್ದವನ ಮನೆಯಲ್ಲಿಯ ಹೆಣ್ಣುಮಕ್ಕಳು ಒಳ್ಳೆಯ ಅಡಿಗೆ ಮಾಡಲು ಬಲ್ಲವರಾಗುವವರಲ್ಲಿ ಸಂಶಯವೇ ಇಲ್ಲ. ನಮ್ಮ ಒಲವುಗಳು ಒಳ್ಳೆಯವಾಗಿದ್ದರೆ, ಪರಿಸ್ಥಿತಿಯೂ ಅದಕ್ಕೆ ಒಪ್ಪುವಂಥವಾಗಿ ನಿರ್ಮಾಣವಾಗುತ್ತದೆ. ಹೇಗಿದ್ದರೂ ಸಾಗಿಸಿಕೊಂಡು ಹೋಗುವ 'ಸಮಾಧಾನಿ' ಗೆ ಹೇಗೋ ಇದ್ದ ಪರಿಸ್ಥಿತಿಯುಂಟಾಗಿ ಬಿಡುತ್ತದೆ. ಆದ ಕಾರಣ ಅಂದಚಂದವಾಗಲಿ ಅಚ್ಚುಕಟ್ಟುತನವಾಗಲಿ ನಮಗೆ ಅನಿವಾರ್ಯವಾಗಿ ನಿಲ್ಲಬೇಕು. ಆಗ ಅದರಂತೆ ನಮ್ಮವರು ನಡೆಸಿ ಕೊಡುತ್ತಾರೆ; ನಾವೂ ಅದಕ್ಕೆ ಹಾಳತವಾಗುವಂತೆ ನಡಕೊಳ್ಳ ಹತ್ತುತ್ತೇವೆ.

## ಅಂದಚಂದಗಳು ಕಂಡಿರಬೇಕು.

ಮನುಷ್ಯನು ಹುಟ್ಟಾ ಅನುಕರಣಪ್ರಿಯನು. ಅಂದರೆ ಇನ್ನೊಂದು ಹೊಸದೇನಾದರೂ ಇದ್ದರೆ ಅದರಂತೆ ಮಾಡಬೇಕೆನ್ನುವ ಸ್ವಭಾವವುಳ್ಳವನು. ಒಳ್ಳೆಯ ಮಾದರಿಯನ್ನು ಅನುಕರಣ ಮಾಡುವಂತೆ ಕೆಡಕು ಮಾದರಿಯನ್ನು ಒಮ್ಮೊಮ್ಮೆ ಮನುಷ್ಯನು ಮಾಡುವದುಂಟು. ಆದರೆ ಒಳ್ಳೆಯ ಮಾದರಿಯನ್ನು ಅನುಕರಣಮಾಡಬೇಕೆಂದರೆ, ಬಡತನವೊಂದು ಅಡ್ಡಗಾಲು ಹಾಕುವದೆಂದು ಹೇಳಲಾಗುತ್ತದೆ. ಹಾಗೆ ಹೇಳುವುದು ತೀರ ಸುಳ್ಳೇನೂ ಅಲ್ಲ. ಅದರಂತೆ ತುಂಬ ನಿಜವೂ ಅಲ್ಲ. ನಾವು ಬಡತನದಿಂದ ಅರ್ಧ ಅಸ್ತವ್ಯಸ್ತತೆಯನ್ನು ತಂದುಕೊಳ್ಳುವೆವಾದರೆ ಮುಗ್ಗಲಗೇಡಿತನದಿಂದ ಅದರಷ್ಟು ಅಥವಾ ಅದಕ್ಕಿಂತ ಹೆಚ್ಚು ಅಸ್ತವ್ಯಸ್ತತೆಯನ್ನು ತಂದುಕೊಳ್ಳುವೆವು. ಹೊಸದಾಗಿ ನೆಂಟತನ ಮಾಡುವ ಮೊದಲು ವಧುವರರ ಮನೆತನದ ಹಿರಿಯರು ಪರಸ್ಪರರು ಮನೆ ನೋಡಲಿಕ್ಕೆ ಹೋಗುವ

ರೂಢಿಯಿರುತ್ತವೆಂಬುದನ್ನು ನಾವೆಲ್ಲರೂ ಬಲ್ಲೆವು. ಹಾಗೆ ಮನೆ ನೋಡಲಿಕ್ಕೆ ಬಂದ ಒಂದೊಪ್ಪತ್ತಿನಲ್ಲಿಯೇ ಆ ಮನೆತನದ ಪರಿಸ್ಥಿತಿಯ ಪರಿಚಯವಾಗಲಿಕ್ಕಿಲ್ಲ; ಅದರಂತೆ ಅದರ ಅಭ್ಯಾಸವೂ ಆಗುತ್ತಿರಲಿಲ್ಲ. ಬಚ್ಚಲೊಂದು ನೋಡಿದರೆ ಆ ಮನೆತನದ ಸಂಸ್ಕೃತಿಯು ನೆಲೆಹತ್ತಿ ಬಿಡುವದು. ಬಚ್ಚಲು ಮನೆಯಲ್ಲಿರಲೇಬೇಕಲ್ಲವೇ? ಮನೆಗೊಂದಿರಬೇಕಾದ ಬಚ್ಚಲು ಮನೆಯ ಅಂಗವಾದಂತೆ ಇರುವುದಲ್ಲವೇ? ಬಚ್ಚಲು ನಿರೀಕ್ಷೆಯಿಂದ ಮನೆತನದ ನಾಡೀ ಪರೀಕ್ಷೆಯೇ ಆಗಿ ಹೋಗುತ್ತದೆ. ಬಚ್ಚಲಲ್ಲಿಟ್ಟ ಹಂಡೆ ಭಾಂಡೆಗಳು, ಮೈಲಿಗೆಯ ಅರಿವೆಗಳು, ಮುಸುರೆಯ ಗಡಿಗೆ, ದುರ್ವಾಸನೆ ಕೊಳಚಿ ಇವುಗಳೆಲ್ಲ ಕೂಡಿ ಆ ಮನೆತನದ ಮಟ್ಟವೆಷ್ಟೆಂಬುದನ್ನು ಎತ್ತಿ ಹೇಳುತ್ತವೆ. "ಮನೆ ನೋಡಾ ಬಡವರದು. ಮನ ನೋಡಾ ದಿವ್ಯ" ಎಂದು ಶಿವಶರಣರ ಮನೆ-ಮನಗಳ ಮಾದರಿಯನ್ನು ಶ್ರೀಬಸವಣ್ಣನವರು ಹಾಕಿಯೇ ಇಟ್ಟಿದ್ದಾರೆ. ಬಡತನವಿದ್ದರೂ ಇರಲೊಲ್ಲದೇಕೆ ಮನಸ್ಸು ದಿವ್ಯವಾಗಿದ್ದರೆ ಅದೆಂಥ ಅಂದಚಂದವನ್ನೂ ಸಾಧಿಸಬಹುದು; ಅದೆಂಥ ಅಚ್ಚುಕಟ್ಟುತನವನ್ನೂ ರಚಿಸಬಹುದು. ಅಂಥ ದಿವ್ಯವಾದ ಮನಸ್ಸು ಒಂದು ಇದ್ದರೆ ಸಾಕು ಅದೊಂದರಿಂದ ಎಲ್ಲೆಲ್ಲಿಯ ಮಾದರಿಗಳನ್ನೂ ಅನುಕರಣಗಳನ್ನೂ ಮನುಷ್ಯನು ಗಳಿಸಬಹುದಾಗಿದೆ.

## ಮಾದರಿಯ ಪ್ರದರ್ಶನ

ಒಳ್ಳೆಯ ಮಾದರಿಗಳನ್ನು ನೋಡುವ ಸುಯೋಗವು ಹಳ್ಳಿಯಲ್ಲಿದ್ದ ಬಹು ಜನರಿಗೆ ಒದಗುತ್ತಿರುವದಿಲ್ಲ. ಹಳ್ಳಿಗರು ಹಲವು ಪ್ರವಾಸಗಳನ್ನು ಮಾಡಿದವರಾಗಿದ್ದರೆ ಅವರು ಅನೇಕ ಮಾದರಿಗಳನ್ನು ಕಂಡು ಬಂದವರಾಗಿರುತ್ತಾರೆ. ಆದರೆ ಅಂಥ ಪ್ರವಾಸ ಮಾಡುವುದಕ್ಕೆ ಬಹು ಜನರಿಗೆ ಅವಕಾಶವೇ ದೊರೆಯುತ್ತಿರುವದಿಲ್ಲ. ಅವಕಾ

ಶವೆಂದರೆ ಬರಿಯ ವೇಳೆ ಅಥವಾ ಪುರಸೊತ್ತೆಂದು ತಿಳಿಯಬಾರದು. ಹೋಗುವ ಮನಸ್ಸು, ಖರ್ಚಿಗೆ ಹಣ ಇವೆಲ್ಲವೂ ಅವಕಾಶವನ್ನು ತಂದು ಕೊಡುತ್ತವೆ. ಹೋಗುವ ಮನಸ್ಸಿದ್ದರೂ ಖರ್ಚಿಗೆ ಹಣ ಇಲ್ಲದಿದ್ದರೆ ವ್ಯರ್ಥವೇ ಸರಿ. ಆದ್ದರಿಂದ ಚಲಚಿತ್ರ ಪ್ರದರ್ಶನಗಳು ಹಳ್ಳಿ ಹಳ್ಳಿಗಳಲ್ಲಿ ನಡೆಯಬೇಕು. ಆ ಕಾಲಕ್ಕೆ ಬೇರೆ ಬೇರೆ ದೇಶ ಗಳಲ್ಲಿಯ ಜನರ ರೀತಿ-ನಡತೆಗಳನ್ನೂ, ಉಡುಪು ತೊಡುಪುಗಳನ್ನೂ, ಊಟ-ಉಣ್ಣುವ ಪದ್ಧತಿಗಳನ್ನೂ, ಮನೆ-ಕೋಣೆಗಳ ಓರಣವನ್ನೂ ತೋರಿಸುವ ಏರ್ಪಾಡು ಆಗಬೇಕು. ಜಗತ್ತಿನೊಳಗಿನ ಒಳ್ಳೆಯ ಮಾದರಿಗಳನ್ನು ಭಾರತದ ಸಂಸ್ಕೃತಿಗೆ ಒಗ್ಗುವಂತೆ ಮಾರ್ಪಡಿಸಿ ಕೆಲವೊಂದು ಕೃತ್ರಿಮ ಮನೆಗಳನ್ನೂ, ಆ ಮನೆಯೊಳಗಿರುವ ಮನೆತನ ದವರನ್ನೂ ಮಾಡಿ ತೋರಿಸುವ ಮಾದರಿಗಳಾದರೂ ಹಳ್ಳಿಗರ ಕಣ್ಣು ಮುಂದೆ ಇರಿಸುವ ಕೆಲಸಗಳು ಸಾಗಬೇಕು. ಹಳ್ಳಿ ಹಳ್ಳಿಗೂ ಜಾತ್ರೆ ಗಳಾಗುತ್ತವೆ; ಅವೆಲ್ಲ ಈಗ ಬರಿಯ ಹುಗ್ಗಿಯ ಜಾತ್ರೆಗಳಾಗಿ ಬಿಟ್ಟಿ ರುತ್ತವೆ. ಬಡಿದಾಟದ ಕುಸ್ತಿಗಳೂ, ಸಂಸ್ಕೃತಿಗೆ ಒಪ್ಪದ ಆಟ-ನೋಟ ಗಳೂ ಹಳ್ಳಿಯ ಜಾತ್ರೆಯ ಮುಖ್ಯ ಕಾರ್ಯಕ್ರಮಗಳಾಗಿ ಬಿಟ್ಟಿವೆ. ಅವುಗಳ ಬದಲಾಗಿ ಅಲ್ಲದಿದ್ದರೂ ಅವುಗಳೊಂದಿಗೆ ಈ ಹೊಸ ಬಾಳು ವೆಯ ಅಂದಚಂದಗಳನ್ನೂ ಅಚ್ಚುಕಟ್ಟುತನವನ್ನೂ ಪ್ರದರ್ಶಿಸುವ ಏರ್ಪಾಡು ಆಗಬೇಕು. ಆ ಬಳಿಕ ಹಾಗೆ ಜೀವಿತವನ್ನು ಮಾರ್ಪಡಿಸ ಬೇಕೆನ್ನುವವರಿಗೆ ಸಹಾಯ ಸವಲತ್ತು, ಉತ್ತೇಜನ ಬಹುಮಾನಗ ಳನ್ನು ಸರಕಾರವು ಕೊಡುವಂತಾಗಬೇಕು.

### ವ್ಯಕ್ತಿಯ ಸಿದ್ಧಿ–ರಾಷ್ಟ್ರದ ಸಿದ್ಧಿ

ಪ್ರತಿಯೊಬ್ಬ ಮನುಷ್ಯನು ತನ್ನ ಮಟ್ಟಿಗೂ, ತನ್ನ ಮನೆತನದ ಮಟ್ಟಿಗೂ ಈ ಅಂದಚಂದದ ಪ್ರಯೋಜನವನ್ನು ಮಾಡಿಕೊಂಡರೂ ಸಾಕು. ಅದು ರಾಷ್ಟ್ರದ ಪ್ರಯೋಜನಕ್ಕೆ ಉಪಕಾರಿಯಾಗುತ್ತದೆ.

ಚಿಗರಿ ಬಲೆಗಾರರಂಥ ಕಾಡು ಜನರನ್ನು ಸುಧಾರಿಸಲಿಕ್ಕೆ, ವಸತಿ ಗೃಹಗಳನ್ನು ನಿರ್ಮಿಸಿ ಉಚ್ಚ ತರದ ಊಟ, ಉಣ್ಣುವ ಪದ್ಧತಿ ಗಳನ್ನು ಕಲಿಸಬಹುದಾಗಿದೆ. ಅಲ್ಲಿ ಸ್ವಚ್ಛವಾದ ಉಡಿಗೆ ತೊಡಿಗೆ ಗಳನ್ನು ಓರಣವಾಗಿ ಇಟ್ಟುಕೊಳ್ಳುವ ರೂಢಿಯನ್ನು ಮಾಡಿಸಬಹು ದಾಗಿದೆ. ಹಾಗೆ ಕೆಲವೊಂದು ವರುಷ ಮಾಡಿದರೆ ಆ ಕಾಡು ಜನರ ಮಕ್ಕಳಲ್ಲಿಯಾದರೂ ಒಳ್ಳೆಯ ಮಾದರಿಯನ್ನು ಅನುಕರಿಸಬೇಕೆನ್ನುವ ಬುದ್ಧಿ ಹುಟ್ಟುತ್ತದೆ. ಅಂಥ ಬುದ್ಧಿ ಹುಟ್ಟಿದರೆ ಅರ್ಧಕ್ಕಿಂತ ಹೆಚ್ಚು ಕೆಲಸವಾದಂತೆಯೇ ಸರಿ. ಊರಿಗೆ ಹೊರಟವನಿಗೆ ಊರು ಸಿಗುವ ಮೊದಲು ಊರಿನ ದಾರಿ ಮೊದಲು ಸಿಗಬೇಕು. ಅಂಥ ದಾರಿ ನಿಶ್ಚಿತವಾದರೆ ಗೊತ್ತು ಮಾಡಿದ ಊರಿಗೆ ತಲಪುವದಕ್ಕೇನೂ ಸಂಶ ಯವಿಲ್ಲ. ಶ್ರೀವಿವೇಕಾನಂದರು ಹೇಳುತ್ತಿದ್ದರು, ಏನಂದರೆ— ಒಬ್ಬನ ಉದ್ಧಾರವಾಗುವಂತಿದ್ದರೆ ಲಕ್ಷ ಸಾರೆ ಜನ್ಮವೆತ್ತಿ ಬರುವೆನು. ವಿವೇಕಾನಂದರಂಥ ಪ್ರತಿಭಾಶಾಲಿಯಾದವರು ಒಬ್ಬನನ್ನು ಉದ್ಧರಿಸು ವುದಕ್ಕೆ ಲಕ್ಷ ಸಾರೆ ಜನ್ಮವೆತ್ತಬೇಕಾಗುವದನ್ನು ತಿಳಿದರೆ, ಜಗತ್ತಿನ ಲ್ಲಿಯ ರಾಷ್ಟ್ರದಲ್ಲಿಯ ಕೆಲಸಗಳೆಷ್ಟೆಂಬುದರ ಕಲ್ಪನೆ ಬರಬಹುದು. ಅಂಥ ಅವಾಢವ್ಯ ಕಾರ್ಯ ಮಾಡುವದಕ್ಕೆ ಹೆರವರು ಬರಲೆಂದು ದಾರಿ ಕಾಯದೆ ತನ್ನನ್ನು ತಾನು ಉದ್ಧರಿಸಿಕೊಳ್ಳುವ ಎತ್ತುಗಡೆಗೆ ತೊಡಗಲಿ.

---

## ವೀರಭಾರತ ಗ್ರಂಥಮಾಲೆಯು

## ಮೂರನೆಯ ವರುಷದಲ್ಲಿ ಪ್ರಕಟ

## ವಾಗಲಿರುವ ಪುಸ್ತಕಗಳು ೧೯೫೩

**ವರುಷದಲ್ಲಿ ನಾಲ್ಕು ಉತ್ತಮ ಗ್ರಂಥಗಳು**

೧ ವಿಜಯಾ — ಶರತ್ ಕಾದಂಬರಿ ೧—೮—೦

೨ ಕಣಗಿಲ ಹೂ (ಕಥಾಸಂಗ್ರಹ) - ಶ್ರೀ. ಸಿಂಪಿ ಲಿಂಗಣ್ಣನವರು

೩ ಬಾಳಿನ ತೆರೆಗಳು — ಶ್ರೀ. ಕೃಷ್ಣಮೂರ್ತಿ ಪುರಾಣಿಕ

೪ ? ?

ವಾರ್ಷಿಕ ವರ್ಗಣಿ ಕೇವಲ ೩—೮—೦ ( ಅಂಚೆವೆಚ್ಚಸೇರಿ )

---

## ಗಳಿಸಿದ ಸ್ವಾತಂತ್ರ್ಯವನ್ನು ಕಾಪಾಡಲು

ಬಲಿಷ್ಠವೂ ತೇಜಸ್ವಿಯೂ ಆದ ಸಮಾಜವೇ ಸಮರ್ಥ;

ಅದಕ್ಕಾಗಿ ತರುಣ ವರ್ಗಕ್ಕೆ

**ಶ್ರೀ. ಶಿವಾನಂದ ಸ್ವಾಮೀಜಿ ಬರೆದ**

# ಬ್ರಹ್ಮಚರ್ಯವೇ ಜೀವನ

## ಅರ್ಥಾತ್ ವೀರ್ಯನಾಶವೇ ಮೃತ್ಯು

ಎಂಬ ವಿಚಾರಪೂರ್ಣ ಗ್ರಂಥ ದಾರಿ ತೋರಿಸುತ್ತದೆ.

ಶ್ರೀ ಮುರಘಾಮಠದಸ್ವಾಮಿ ಮತ್ತು ಆಲೂರ ವೆಂಕಟರಾಯರು ಸದಭಿಪ್ರಾಯಗಳಿವೆ. ವಿವಿಧ ವ್ಯಾಯಾಮ ಮತ್ತು ಆಸನಗಳ ಚಿತ್ರಮಯ ವಿವರಣೆಗಳು! ವೀರ್ಯನಾಶದ ಲಕ್ಷಣಗಳು, ಕಾರಣಗಳು ಹಾಗೂ ಅದರ ರಕ್ಷಣೆಗಾಗಿ ರಾಮಬಾಣ ಉಪಾಯಗಳು!

ಬೆಲೆ ಅಂಚೆ ವೆಚ್ಚ ಸೇರಿ ರೂ. ೩-೮-೦

**ದಿ ಅಜಿತ ಏಜನ್ಸಿ, ಟಿಳಕಚೌಕ-ಬೆಳಗಾವಿ.**

## ಸುಧಾರಿಸಿದ ಎರಡನೆಯ ಆವೃತ್ತಿ.

ವೀರ ಶಿರೋಮಣಿ ಮಹಾರಾಣಿ

# "ಕೆಳದಿ ಚೆನ್ನಮ್ಮ"

ಬರೆದವರು:- ಶ್ರೀ. ಎನ್. ಡಿ. ಬಗರಿ.

ಪರಹಿತ ಮಾಡುವದೇ ಮಾನವನ ಆದ್ಯ ಕರ್ತವ್ಯವೆಂದು ತೋರಿಸುವ........ ಸಹಾಯ ಕೋರಿದ ಮಹಾರಾಷ್ಟ್ರದ ನಿರ್ಗತಿಕ ರಾಜಾರಾಮನಿಗೆ ನೆರವು ಕೊಟ್ಟು ಸಾರ್ವಭೌಮ ಔರಂಗಜೇಬನೊಡನೆ ಹೋರಾಡಿದ ಮಹಾರಾಣಿ ಕೆಳದಿ "ಚೆನ್ನಮ್ಮ"ನ ಜೀವನದಲ್ಲಿಯ ಒಂದು ಘಟನೆಯನ್ನೇ ತೆಗೆದುಕೊಂಡು ಸರಾಗವಾಗಿ ಚಿತ್ರಿಸಿದ ನಾಟಕವು.

ಬೆಲೆ : ೦-೬-೦

---

## ಓದಿರಿ ! ಮಾನಸಿಕ ತೊಂದರೆಯಿಂದ ಮುಕ್ತರಾಗಿರಿ !

ಪ್ರತಿಯೊಬ್ಬ ಅವಿವಾಹಿತ ತರುಣ ತರುಣಿಯರು ಅತ್ಯವಶ್ಯವಾಗಿ ಓದಲೇ ಬೇಕಾದ ಅತ್ಯುಪಯುಕ್ತ ಪುಸ್ತಕ.

# ಅವಿವಾಹಿತರ ಲೈಂಗಿಕ ವಿಚಾರ

ಬೆಲೆ: ೦-೮-೦

ಲೇಖಕ:- ಭಾಯಿ ಪ್ರೇಮಾನಂದ, ಬಿ. ಎ.

ಪ್ರತಿಯೊಬ್ಬ ತರುಣ -- ತರುಣಿಯರ ಮನಸ್ಸಿನೊಳಗೆ ಕಾಮವಿಷಯಕವಾಗಿ ಗೊಂದಲವನ್ನೆಬ್ಬಿಸುವ ವಿಚಾರವನ್ನು ಚಿಕಿತ್ಸಕ ರೀತಿಯಿಂದ ಶಾಸ್ತ್ರೋಕ್ತವಾಗಿ ವಿವೇಚಿಸುವ ಅತ್ಯುತ್ತಮ ಪುಸ್ತಕವು ಇದೊಂದೇ !

ಹತ್ತು ಆಣೆಯ ಪೋಸ್ಟ ತಿಕಿಟು ಕಳಿಸಿ ಪುಸ್ತಕವನ್ನು ಪಡೆಕೊಳ್ಳಬೇಕು.

ದಿ ಅಜಿತ ಏಜನ್ಸಿ, ಟಿಳಕಚೌಕ-ಬೆಳಗಾವಿ.

